# ಶ್ರೀ ಪುರಂದರದಾಸಾರ್ಯ

ವಿರಚಿತ

# ಶ್ರೀ ಮಧ್ವಾಚಾರ್ಯ ಸುಳಾದಿ



ಸಂಪಾದಕ : ಅರವಿಂದಲೋಚನ

# ಶ್ರೀ ಪುರಂದರದಾಸಾರ್ಯ

ವಿರಚಿತ

# ಶ್ರೀ ಮಧ್ವಾಚಾರ್ಯ ಸುಳಾದಿ

ಸಂಪಾದಕ : ಅರವಿಂದಲೋಚನ

ಗತಶಾಲಿವಾಹನಶಕ ೧೯೪೨ ಚಾಂದ್ರಮಾನ

ಶಾರ್ವರೀ ನಾಮ ಸಂವತ್ಸರದ

ಹೇಮಂತಋತುವಿನ

ಮಾರ್ಗಶೀರ್ಷ ಮಾಸದ

ಕೃಷ್ಣ ಪಕ್ಷದ ದಶಮೀ ತಿಥಿಯಂದು ಈ ಗ್ರಂಥವು

ಪ್ರಕಟ

# ಶ್ರೀ ಮಧ್ವಾಚಾರ್ಯ ಸುಳಾದಿ

## ರಾಗ : ಸುರಠಿ

## ಧ್ರುವತಾಳ

ಒಬ್ಬ ಆಚಾರ್ಯನು ದೈವವೇ ಇಲ್ಲವೆಂಬ |
ಒಬ್ಬ ಆಚಾರ್ಯನು ದೈವಕೆ ಎಂಟು ಗುಣವೆಂಬ |
ಒಬ್ಬ ಆಚಾರ್ಯನು ನಿರ್ಗುಣ ನಿರಾಕಾರ
ನಿರೂಹನೆಂದು ತಾನೆ ದೈವವೆಂಬ |
ಇವರೊಬ್ಬರೂ ವೇದಾರ್ಥವರಿತೂ ಅರಿಯರು |
ಇವರೊಬ್ಬರೂ ಶಾಸ್ತ್ರಾರ್ಥವರಿತೂ ಅರಿಯರು |

ಒಬ್ಬ ಮಧ್ವಾಚಾರ್ಯರೆ ಪುರಂದರವಿಠ್ಠಲನೊಬ್ಬನೆ
ಎಂದು ತೋರಿ ಕೊಟ್ಟವರಾಗಿ ||1||

# ಮಟ್ಟ ತಾಳ

ಹರಿಪರ ದೇವತೆ ಎಂಬ ಜ್ಞಾನವೇ ಜ್ಞಾನ |
ಹರಿಯಡಿಗಳನೈದುವ ಮುಕುತಿಯೇ ಮುಕುತಿ |
ಹರಿ ವಿರಹಿತ ಜ್ಞಾನ ಮಿಥ್ಯಾ ಜ್ಞಾನ |
ಹರಿ ವಿರಹಿತ ಮುಕುತಿ ಮಾತಿನ ಮುಕುತಿ |
ಹರಿಪರ ಸಿರಿ ಮಧ್ವಾಚಾರ್ಯರೇ ಗುರುಗಳು |
ತ್ರೈಲೋಕ್ಯಕೆ ಪುರಂದರವಿಠ್ಠಲನೆ ದೈವವು ||2||

# ರೂಪಕತಾಳ

ಸುರತರುವಿರುತಿರೆ ಎಲವದಫಲ ಗಿಳಿ ಬಯಸಿಪ್ಪಂತೆ |

ಹಿರಯರಾದರು ನೋಡ ಹರಿಪರದೈವೆಂದರಿಯದೆ |

ಗುರುಗಳಾದರು ನೋಡ ಹರಿ ಪರದೈವೆಂದರಿಯದೆ|

ಸಿರಿವಿರಿಂಚಿ ಭವಾದಿಗಳೆಲ್ಲ ಹರಿಯ

ಡಿಂಗರಿಗರೆಂದರಿಯದೆ |

ಹಿರಿಯರಾದರು ನೋಡು ಗುರುಗಳಾದರು ನೋಡ|

ಸಿರಿ ಪುರಂದರವಿಠ್ಠಲನ ತೋರಿದ

ಸಿರಿ ಮಧ್ವಾಚಾರ್ಯರಿರುತಿರೆ

ಗುರುಗಳಾದರು ನೋಡ ||3||

# ತ್ರಿವಿಡ ತಾಳ

ಸೋಽಹಂ ಎಂದು ಲೋಕವ ಮೋಹಿಸುವರ |
ನಿರಾಕರಿಸಿ ದಾಸೋಽಹಂ ರಹಸ್ಯವನರುಹಿದ |
ಸೋಽಹಂ ಎಂಬ ಸಿರಿ ಪುರಂದರವಿಠ್ಠಲ ನಾಳು |
ಮಧ್ವ ಮುನಿ ದಾಸೋಽಹಂ ಎಂಬ ||4||

# ಆದಿತಾಳ

ವೈದಿಕ ಮತದಲಿ ನಡೆದೆವೆಂದು ತಾವು
ವೈಷ್ಣವವಂಬಿಟ್ಟು ಕೊಟ್ಟರು ಕೆಲವರು |

ವೈಷ್ಣವ ಮತದಲ್ಲಿ ನಡದೆವೆಂದು
ವೈದಿಕವಂ ಬಿಟ್ಟುಕೊಟ್ಟರು ಕೆಲವರು |
ವೈದಿಕ ವೈಷ್ಣವ ಒಂದೇ ಎಂದು ಮಧ್ವಮತ ಮುನಿ
ಪ್ರತಿಪಾದಿಸಿದ ಪುರಂದರವಿಠ್ಠಲ ಮೆಚ್ಚ ||5||

# ಝಂಪೆತಾಳ

ಏಕ ವಿಂಶತಿ ಕುಭಾಷ್ಯ ದೂಷಕನೆಂಬ
ಬಿರುದು ನಮ್ಮಯ ಗುರುರಾಯಗಲ್ಲದುಂಟೆ |
ಪುರಂದರವಿಠ್ಠಲ ಸರ್ವೋತ್ತಮನೆಂಬ
ಸಿದ್ಧಾಂತವು ನಮ್ಮ ಗುರು ರಾಯರಗಲ್ಲದುಂಟೆ ||6||

# ಅಟ್ಟತಾಳ

ಹರಿಯೆ ಪರಮ ಗುರು ಪರಮೇಷ್ಠಿ ಗುರು ಸುರ |
ಗುರಮಧ್ವಾಚಾರ್ಯ ಚಕ್ರವರ್ತಿ ಎಂ-
ದರಿತಿರೆ ಭಕುತಿ ಮುಕುತಿಯುಂಟು |
ಪುರಂದರವಿಠ್ಠಲನೆ ದೈವಾದಿ ದೈವ |
ಸುರ ಗುರು ಮಧ್ವಾಚಾರ್ಯರೆ ಚಕ್ರವರ್ತಿ ||7||

# ಜತೆ

ಶರಣು ಗಿರಿ ಮಧ್ವಾಚಾರ್ಯರಿಗೆ ಪುರಂದರವಿಠ್ಠಲಗೆ |
ಶರಣು ಶರಣೆಂಬೆ ನಾನನವರತ ||

## ||ಶ್ರೀ ಕೃಷ್ಣಾರ್ಪಣಮಸ್ತು||
## ||ಶ್ರೀ ಮಧ್ವೇಶಾರ್ಪಣಮಸ್ತು||